# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1531
2. ಸದಸ್ಯರ ಹೆಸರು : ಶ್ರೀ ಬಿ.ಕೆ. ಹರಿಪ್ರಸಾದ್ (ವಿಧಾನಸಭೆಯಿಂದ ಚುನಾಯಿತರಾದವರು)
3. ಉತ್ತರಿಸುವ ದಿನಾಂಕ : 18-03-2021
4. ಉತ್ತರಿಸುವವರು : ಮುಖ್ಯಮಂತ್ರಿಗಳು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಬೆಂಗಳೂರು ನಗರದ ಶಿವಾನಂದ ವೃತ್ತದ ಬಳಿ ಮೇಲು ಸೇತುವೆ ನಿರ್ಮಾಣ ಕಾರ್ಯ ಯಾವಾಗ ಆರಂಭವಾಯಿತು; ಈ ಮೇಲು ಸೇತುವೆಯ ಅಂದಾಜು ವೆಚ್ಚ ಹಾಗೂ ಒದಗಿಸಿರುವ ಅನುದಾನ ಎಷ್ಟು; ಇದುವರೆಗೆ ನಡೆದಿರುವ ಕಾಮಗಾರಿಗಳಾವುವು; (ವಿವರ ನೀಡುವುದು) | • ಬೆಂಗಳೂರು ನಗರದ ಶಿವಾನಂದ ವೃತ್ತದ ಬಳಿ ಮೇಲು ಸೇತುವೆ ನಿರ್ಮಾಣ ಕಾರ್ಯ ದಿನಾಂಕ: 24-06-2017 ರಂದು ಆರಂಭವಾಯಿತು.<br>• ಆದರೆ, ಸ್ಥಳೀಯ ನಿವಾಸಿಗಳು ಯೋಜನೆಯ ವಿರುದ್ಧ ಆಕ್ಷೇಪಣೆ ಮಾಡಿದ್ದು ಹಾಗೂ ಘನ ಉಚ್ಛ ನ್ಯಾಯಾಲಯದಲ್ಲಿ ದಿನಾಂಕ: 19-08-2017 ರಂದು ರಿಟ್ ಅರ್ಜಿ ಸಲ್ಲಿಸಲಾಗಿದ್ದು, ಈ ಅರ್ಜಿಗೆ ಸಂಬಂಧಪಟ್ಟಂತೆ ಹಲವಾರು ಬಾರಿ ವಿಚಾರಣೆಗಳು ನಡೆದು ದಿನಾಂಕ: 08-01-2018 ರಂದು ಘನ ಉಚ್ಚ ನ್ಯಾಯಾಲಯವು ಯೋಜನೆಯ ವಿನ್ಯಾಸವನ್ನು ಪರಿಷ್ಕರಿಸಿ ಕಾಮಗಾರಿಯನ್ನು ಪುನಃ ಪ್ರಾರಂಭ ಮಾಡಲು ಮಧ್ಯಂತರ ಆದೇಶ ನೀಡಿರುತ್ತದೆ.<br>• ಘನ ಉಚ್ಚ ನ್ಯಾಯಾಲಯವು ನೀಡಿರುವ ಆದೇಶದಂತೆ ಯೋಜನೆಯ ವಿನ್ಯಾಸವನ್ನು ಮಾರ್ಪಡಿಸಿ, ಪರಿಷ್ಕೃತ ಅಂದಾಜು ಪಟ್ಟಿಯನ್ನು ಸರ್ಕಾರದ ಅನುಮೋದನೆಗೆ ಸಲ್ಲಿಸಿದ್ದು, ದಿನಾಂಕ: 24-07-2020 ರಂದು ಸರ್ಕಾರವು ಪರಿಷ್ಕೃತ ಮೊತ್ತ ರೂ.43.70 ಕೋಟಿಗಳಿಗೆ ಅನುಮೋದನೆ ನೀಡಿ, ಅನುದಾನವನ್ನು ಒದಗಿಸಿರುತ್ತದೆ.<br>• ಸದರಿ ಕಾಮಗಾರಿಯಲ್ಲಿ ಇದುವರೆಗೆ ಪೈಲ್ ಫೌಂಡೇಶನ್, ಪೈಲ್ ಕ್ಯಾಪ್, ಪಿಯರ್, ಪಿಯರ್ ಬೀಮ್ (ಕ್ಯಾಪ್), ಗರ್ಡರ್ಸ್, ಡೆಕ್ ಸ್ಲ್ಯಾಬ್ ಕಾಮಗಾರಿಗಳು ಸೇರಿದಂತೆ ಶೇ 70 ರಷ್ಟು ಕಾಮಗಾರಿ ಪೂರ್ಣಗೊಂಡಿರುತ್ತದೆ. ಇದುವರೆಗೆ ನಡೆದಿರುವ ಕಾಮಗಾರಿಗಳ ಪ್ರಗತಿಯ ವಿವರ ಈ ಕೆಳಕಂಡಂತಿದೆ.<br>✓ 60 ಪೈಲ್‌ಗಳ ಪೈಕಿ, ಎಲ್ಲಾ 60 ಪೈಲ್‌ಗಳು ಪೂರ್ಣಗೊಂಡಿರುತ್ತವೆ. |

. . .2/-

| | | |
|---|---|---|
| | | ✓ 15 ಪೈಲ್‌ಕ್ಯಾಪ್‌ಗಳ ಪೈಕಿ, ಎಲ್ಲಾ 15 ಪೈಲ್‌ಕ್ಯಾಪ್‌ಗಳು ಪೂರ್ಣಗೊಂಡಿರುತ್ತವೆ.<br>✓ ಒಂದು ತೆರೆದ ತಳಪಾಯ ಕಾಮಗಾರಿ ಪ್ರಗತಿಯಲ್ಲಿದೆ.<br>✓ 15 ಪೈಲ್‌ಕ್ಯಾಪ್ ಪೆಡೆಸ್ಟಲ್‌ಗಳ ಪೈಕಿ, ಎಲ್ಲಾ 15 ಪೈಲ್‌ಕ್ಯಾಪ್ ಪೆಡೆಸ್ಟಲ್‌ಗಳು ಪೂರ್ಣಗೊಂಡಿರುತ್ತವೆ.<br>✓ 16 ಪಿಯರ್ ಮತ್ತು ಪಿಯರ್‌ಕ್ಯಾಪ್‌ಗಳ ಪೈಕಿ, 13 ಪಿಯರ್ ಮತ್ತು ಪಿಯರ್‌ಕ್ಯಾಪ್‌ಗಳು ಪೂರ್ಣಗೊಂಡಿರುತ್ತವೆ.<br>✓ 30 ಡಯಾಫ್ರಮ್‌ಗಳ ಪೈಕಿ, 24 ಡಯಾಫ್ರಮ್‌ಗಳು ಪೂರ್ಣಗೊಂಡಿರುತ್ತವೆ.<br>✓ 90 ಐ-ಗರ್ಡರ್‌ಗಳ ಪೈಕಿ, 72 ಐ-ಗರ್ಡರ್‌ಗಳು ಪೂರ್ಣಗೊಂಡಿರುತ್ತವೆ.<br>✓ 15 ಡೆಕ್‌ಸ್ಲಾಬ್‌ಗಳ ಪೈಕಿ, 08 ಡೆಕ್‌ಸ್ಲಾಬ್‌ಗಳು ಪೂರ್ಣಗೊಂಡಿರುತ್ತವೆ.<br>✓ 1237 ಚ.ಮೀ ರೀಇನ್‌ಫೋರ್ಸ್‌ಡ್ ಅರ್ಥ್ ಪ್ಯಾನೆಲ್‌ಗಳ ಪೈಕಿ, 1108 ಚ.ಮೀ ರೀಇನ್‌ಫೋರ್ಸ್‌ಡ್ ಅರ್ಥ್ ಪ್ಯಾನೆಲ್‌ಗಳು ಸಿದ್ಧಗೊಂಡಿರುತ್ತವೆ. |
| ಆ | ಇದುವರೆಗೆ ಖರ್ಚಾಗಿರುವ ಅನುದಾನ ಹಾಗೂ ಇನ್ನೂ ಅಗತ್ಯವಾಗಿರುವ ಅನುದಾನದ ಪ್ರಮಾಣ ಎಷ್ಟು; ಕಾಮಗಾರಿ ವಿಳಂಬದಿಂದ ಸುಗಮ ಸಂಚಾರಕ್ಕೆ ತೊಂದರೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸದರಿ ಕಾಮಗಾರಿಗೆ ಇದುವರೆಗೆ ರೂ.22.50 ಕೋಟಿಗಳನ್ನು ಪಾವತಿಸಲಾಗಿದ್ದು, ಉಳಿದ ಕಾಮಗಾರಿಗೆ ಇನ್ನೂ ರೂ.(39.54-22.50) ರೂ.17.04 ಕೋಟಿಗಳು ಅವಶ್ಯವಿದ್ದು, ಅನುದಾನವು ಸರ್ಕಾರದಿಂದ ಅನುಮೋದನೆಯಾಗಿರುತ್ತದೆ. ಪ್ರಸ್ತುತ ಕಾಮಗಾರಿಯಲ್ಲಿ ಶೇ.70 ರಷ್ಟು ಪ್ರಗತಿಯನ್ನು ಸಾಧಿಸಲಾಗಿರುತ್ತದೆ. ಸುಗಮ ಸಂಚಾರಕ್ಕೆ ಸಂಚಾರಿ ಪೋಲೀಸ್ ರವರ ಸಮನ್ವಯದಿಂದ ಬದಲಿ ರಸ್ತೆಗಳಲ್ಲಿ ಸಂಚಾರಕ್ಕೆ ಅವಕಾಶ ಕಲ್ಪಿಸಲಾಗಿರುತ್ತದೆ. |
| ಇ | ಈ ಮೇಲು ಸೇತುವೆ ಕಾಮಗಾರಿಯನ್ನು ತ್ವರಿತವಾಗಿ ಮುಕ್ತಾಯ ಮಾಡಲು ಕ್ರಮ ತೆಗೆದುಕೊಳ್ಳಲಾಗುವುದೇ? | ಸದರಿ ಮೇಲು ಸೇತುವೆ ಕಾಮಗಾರಿಯು ಪ್ರಗತಿಯಲ್ಲಿದ್ದು, ಈವರೆಗೆ ಶೇ.70 ರಷ್ಟು ಪ್ರಗತಿಯನ್ನು ಸಾಧಿಸಲಾಗಿರುತ್ತದೆ. ಉಳಿದ ಕಾಮಗಾರಿಯನ್ನು ಜೂನ್-2021 ರೊಳಗೆ ಪೂರ್ಣಗೊಳಿಸಲು ಕ್ರಮ ಕೈಗೊಳ್ಳಲಾಗಿರುತ್ತದೆ. |

**ಸಂಖ್ಯೆ: ನಅಇ 77 ಎಂಎನ್‌ವೈ 2021 (ಇ)**

(ಬಿ.ಎಸ್. ಯಡಿಯೂರಪ್ಪ)
ಮುಖ್ಯಮಂತ್ರಿ